# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | | 86 (875) |
| ಸದಸ್ಯರ ಹೆಸರು | | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | | 20.09.2021 |
| ಉತ್ತರಿಸಬೇಕಾದ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಪ್ರಶ್ನೆ | | ಉತ್ತರ |
| (ಅ) | ಸರ್ಕಾರಿ ಪದವಿ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿರುವವರಿಗೆ ಮಾಸಿಕ ನೀಡಲಾಗುತ್ತಿರುವ ಗೌರವ ಸಂಭಾವನೆ ಎಷ್ಟು? | ಸರ್ಕಾರದ ಆದೇಶ ಸಂಖ್ಯೆ: ಇಡಿ/66/ಡಿಸಿಇ/2017, ದಿನಾಂಕ:04.04.2017ರನ್ವಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರುಗಳಲ್ಲಿ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ಶೇ.55ರಷ್ಟು ಅಂಕಗಳನ್ನು ಪಡೆದಿದ್ದು, ಎನ್‌ಇಟಿ/ ಎಸ್‌ಎಲ್‌ಇಟಿ ಅಥವಾ ಪಿ.ಹೆಚ್‌ಡಿ ಪಡೆದುಕೊಂಡಿರುವ ಅತಿಥಿ ಉಪನ್ಯಾಸಕರಿಗೆ ರೂ.13,000/- ಹಾಗೂ ಸ್ನಾತಕೋತ್ತರ/ಎಂ.ಫಿಲ್ ಪದವೀಧರ ಅತಿಥಿ ಉಪನ್ಯಾಸಕರಿಗೆ ರೂ.11,000/-ಗಳನ್ನು ಪಾವತಿಸಲಾಗುತ್ತಿದೆ. |
| (ಆ) | ಸದರಿ ಗೌರವ ಸಂಭಾವನೆಯನ್ನು ಹೆಚ್ಚಿಸಲು ಸರ್ಕಾರ ಚಿಂತಿಸುವುದೇ; | ಪ್ರಸ್ತುತ ಕೋವಿಡ್-19ರ ಹಿನ್ನೆಲೆಯಲ್ಲಿ ಉಂಟಾಗಿರುವ ಆರ್ಥಿಕ ಮುಗ್ಗಟ್ಟಿನ ಹಾಗೂ ಆರ್ಥಿಕ ಮಿತವ್ಯಯ ಸಂಬಂಧ ಅತಿಥಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿರುವವರಿಗೆ ಗೌರವಧನ ಹೆಚ್ಚಿಸಿರುವುದಿಲ್ಲ. |
| (ಇ) | ಯಾವ ಕಾಲಮಿತಿಯಲ್ಲಿ, ಎಷ್ಟು ಪ್ರಮಾಣದಲ್ಲಿ ಗೌರವ ಸಂಭಾವನೆಯನ್ನು ಹೆಚ್ಚಿಸಲಾಗುವುದು; | |
| (ಈ) | ಸದರಿ ಉಪನ್ಯಾಸಕರನ್ನು ಖಾಯಂಗೊಳಿಸುವ ಚಿಂತನೆ ಸರ್ಕಾರದ ಮುಂದಿದೆಯೇ; | ಇಂತಹ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| (ಉ) | ಹಾಗಿದ್ದಲ್ಲಿ, ಯಾವ ನಿಯಮಗಳನ್ನು ಅನುಸರಿಸಿ, ಯಾವ ಅವಧಿಯಲ್ಲಿ ಖಾಯಂಗೊಳಿಸಲಾಗುವುದು; | |
| (ಊ) | ಪ್ರತಿ ತಿಂಗಳು ಸಕಾಲದಲ್ಲಿ ಗೌರವ ಸಂಭಾವನೆ ಪಾವತಿಸಲು ಕ್ರಮಕೈಗೊಳ್ಳಲಾಗುವುದೇ? | ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಗೌರವ ಸಂಭಾವನೆ ಪಾವತಿಸಲು ವೇತನೇತರ ಬಾಬ್ತಿನ ಲೆಕ್ಕಶೀರ್ಷಿಕೆಯಡಿಯಲ್ಲಿ ಅನುದಾನವನ್ನು ನಿಗದಿಪಡಿಸಲಾಗಿರುತ್ತದೆ. ಅನುದಾನವನ್ನು **ನಾಲ್ಕು ತ್ರೈಮಾಸಿಕ** ಕಂತಿನಲ್ಲಿ ಬಿಡುಗಡೆ ಮಾಡುವುದರಿಂದ, ಪ್ರತಿ ಕಂತಿನ ಅನುದಾನವನ್ನು ನಿಯಮಿತವಾಗಿ ಬಿಡುಗಡೆ ಮಾಡಲು ಹಾಗೂ ಬಿಡುಗಡೆಯಾದ ಕೂಡಲೇ ಮಾಹೆಯಾನ ಅತಿಥಿ ಉಪನ್ಯಾಸಕರಿಗೆ ಗೌರವ ಸಂಭಾವನೆ ಪಾವತಿಸಲು ಕ್ರಮವಹಿಸಲಾಗುವುದು. |

ಇಡಿ 163 ಡಿಸಿಇ 2021

**(ಡಾ|| ಅಶ್ವತ್ಥ ನಾರಾಯಣ ಸಿ.ಎನ್)**
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.